# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 1650 |
| ಸದಸ್ಯರ ಹೆಸರು | ಡಾ ॥ ಜೈಮಾಲ ರಾಮಚಂದ್ರ,(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 20.03.2020 |
| ಉತ್ತರಿಸುವವರು | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ಮತ್ತು ಬೀದರ್ ಜಿಲ್ಲೆಯಲ್ಲಿ ಬಾಲ ಭವನ ಸ್ಥಾಪಿಸುವ ಪ್ರಸ್ತಾವನೆ ಪ್ರಸ್ತುತ ಯಾವ ಹಂತದಲ್ಲಿದೆ | ಉಡುಪಿ ಹಾಗೂ ಬೀದರ್ ಜಿಲ್ಲೆಗಳಲ್ಲಿ ಈಗಾಗಲೇ ಬಾಲಭವನ ಇರುತ್ತದೆ. |
| ಆ | ಉಡುಪಿ ಜಿಲ್ಲೆಯ ಕಾರ್ಕಳದಲ್ಲಿ ಬಾಲ ಭವನ ನಿರ್ಮಿಸುವ ಕಾರ್ಯ ಯಾವ ಹಂತದಲ್ಲಿದೆ;(ಪೂರ್ಣ ವಿವರ ನೀಡುವುದು) | ಕಾರ್ಕಳ ತಾಲ್ಲೂಕಿನ ಕಸಬ ಗ್ರಾಮದ 401/ಪಿ/1ಯಲ್ಲಿ 10 ಎಕರೆ ಜಮೀನನ್ನು ಬಾಲ ಭವನ ನಿರ್ಮಾಣ ಹಾಗೂ ಉದ್ಯಾನವನ ನಿರ್ಮಿಸುವ ಉದ್ದೇಶಕ್ಕಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಕಾಯ್ದಿರಿಸಲು ಜಿಲ್ಲಾಧಿಕಾರಿಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಸದರಿ ಸ್ಥಳವು ಪಹಣಿ ಪತ್ರದ ಕಾಲಂ 11ರಲ್ಲಿ ರಾಮಸಮುದ್ರ ಕಾಡು ಎಂದು ದಾಖಲಾಗಿದ್ದು, ಅರಣ್ಯ ಇಲಾಖೆಯ ನೆಡುತೋಪು ಸ್ಥಳವಾಗಿದ್ದು, ಸ್ಟ್ಯಾಚುಟರಿ ಫಾರೆಸ್ಟ್ ಆಗಿರುವುದರಿಂದ, ಜಮೀನು ಮಂಜೂರಾತಿಗೆ ಅರಣ್ಯ ಇಲಾಖೆಯವರು ಆಕ್ಷೇಪಿಸಿರುವುದಾಗಿ ಕಾರ್ಕಳ ತಾಲ್ಲೂಕಿನ ತಹಸೀಲ್ದಾರರು ತಿಳಿಸಿರುತ್ತಾರೆ. ಆದ್ದರಿಂದ ಸದರಿ ಜಾಗದ ಬದಲಾಗಿ ಪರ್ಯಾಯ ನಿವೇಶನ ಒದಗಿಸುವಂತೆ ಮಾನ್ಯ ಜಿಲ್ಲಾಧಿಕಾರಿಯವರಿಗೆ ಮನವಿ ಮಾಡಲಾಗಿದೆ |
| ಇ | ಕೇಂದ್ರ ಸರ್ಕಾರ ಈಗಾಗಲೇ 2 ಟಾಯ್-ಟ್ರೈನ್ ಗಳನ್ನು ಬಾಲ ಭವನಕ್ಕೆ ನೀಡುವ ಪ್ರಸ್ತಾವನೆ ಇದ್ದು ಅದನ್ನು ಪಡೆದುಕೊಳ್ಳಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಜಿಲ್ಲೆಗಳಲ್ಲಿ ಪುಟಾಣಿ ರೈಲು ಅಳವಡಿಸಲು ಸ್ಥಳಾವಕಾಶದ ಲಭ್ಯತೆಗೆ ಪೂರಕವಾಗಿ ಯಾವುದೇ ಪ್ರಸ್ತಾವನೆ ಸ್ವೀಕೃತವಾಗದಿರುವ ಕಾರಣ ಟಾಯ್ ಟ್ರೈನ್ ಅಳವಡಿಸಲು ಸಾಧ್ಯವಾಗಿರುವುದಿಲ್ಲ. ನಿವೇಶನ ಗುರುತಿಸಲು ಕ್ರಮ ವಹಿಸಲಾಗುತ್ತಿದೆ. |
| ಈ | ರಾಜ್ಯದ 30 ಜಿಲ್ಲೆಗಳಲ್ಲೂ ಬಾಲ ಭವನ ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಹೌದು. ಈಗಾಗಲೇ 19 ಜಿಲ್ಲೆಗಳಲ್ಲಿ ಬಾಲ ಭವನವು ಸ್ವಂತ ಕಟ್ಟಡ ಹೊಂದಿರುತ್ತದೆ. ಇನ್ನುಳಿದ ಜಿಲ್ಲೆಗಳಲ್ಲಿ ಬಾಲ ಭವನದ ನಿರ್ಮಾಣಕ್ಕಾಗಿ ನಿವೇಶನ ಪಡೆಯಲು ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: ಮಮಇ/11/ರಾಮಅ2020**

(ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು